# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 272 |
| ಸದಸ್ಯರ ಹೆಸರು | ಶ್ರೀ. ವಿಜಯ ಸಿಂಗ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸುವ ದಿನಾಂಕ | 09-12-2020 |
| ಉತ್ತರಿಸುವ ಸಚಿವರು | ಉಪಮುಖ್ಯಮಂತ್ರಿಗಳು<br>ಲೋಕೋಪಯೋಗಿ ಇಲಾಖೆ |

| ಕ್ರ ಸಂ: | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಔರಾದ್-ಬೀದರ್ ರಾಜ್ಯ ಹೆದ್ದಾರಿ ರಸ್ತೆ ಸಂಪೂರ್ಣ ಹಾಳಾಗಿದ್ದು, ದುರಸ್ತಿಗೆ ಯಾವ ಕ್ರಮ ಕೈಗೊಳ್ಳಲಾಗಿದೆ: | ಔರಾದ್-ಬೀದರ್ ರಸ್ತೆಯು ರಾಷ್ಟ್ರೀಯ ಹೆದ್ದಾರಿ-161(ಎ) ಎಂದು ದಿನಾಂಕ: 03.01.2017 ರಂದು ಘೋಷಣೆಯಾಗಿದ್ದು, ಸದರಿ ರಸ್ತೆಯನ್ನು ಲೋಕೋಪಯೋಗಿ ಇಲಾಖೆ ವಿಭಾಗ, ಬೀದರ್ ಇವರು ದಿ: 15.06.2019ರಂದು ರಾಷ್ಟ್ರೀಯ ಹೆದ್ದಾರಿ ವಿಭಾಗ, ಕಲ್ಬುರ್ಗಿ ಇವರಿಗೆ ಹಸ್ತಾಂತರಿಸಿರುತ್ತಾರೆ. ರಸ್ತೆಯ ಒಟ್ಟು ಉದ್ದ 45.878 ಕಿ.ಮೀ. ಇರುತ್ತದೆ. ಇದುವರೆವಿಗೂ ಯಾವುದೇ ಮೂಲ ಕಾಮಗಾರಿಗಳನ್ನು ಕೈಗೊಂಡಿರುವುದಿಲ್ಲ. ಆದರೆ 2019-20ನೇ ಸಾಲಿನಲ್ಲಿ ರೂ.1.23 ಕೋಟಿ ವೆಚ್ಚದಲ್ಲಿ ನಿರ್ವಹಣೆ ಮತ್ತು ದುರಸ್ಥಿ ಕಾಮಗಾರಿ ಕೈಗೊಂಡು ರಸ್ತೆಯನ್ನು ವಾಹನ ಸಂಚಾರಕ್ಕೆ ಯೋಗ್ಯವಾಗಿಡಲಾಗಿದೆ.<br><br>ಭೂಸಾರಿಗೆ ಮತ್ತು ಹೆದ್ದಾರಿಗಳ ಮಂತ್ರಾಲಯವು ದಿನಾಂಕ: 14.05.2020 ರಲ್ಲಿ Gazette of India ದಲ್ಲಿ ಸದರಿ ರಸ್ತೆಯನ್ನು ಭಾರತೀಯ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರಕ್ಕೆ ವಹಿಸಿದೆ. ಈ ಹೆದ್ದಾರಿಯ ಕಿಮೀ.0.00 ರಿಂದ 9.30 ರವರೆಗಿನ ರಸ್ತೆಯು ರಾಷ್ಟ್ರೀಯ ಹೆದ್ದಾರಿ ವಲಯದ ವ್ಯಾಪ್ತಿಯಲ್ಲಿದೆ. ಕಿಮೀ.9.30 ರಿಂದ 46.700 ರವರೆಗಿನ ಕಾಮಗಾರಿಗೆ ಟೆಂಡರ್ ಪ್ರಕ್ರಿಯೆ ಪ್ರಗತಿಯಲ್ಲಿದ್ದು, ಗುತ್ತಿಗೆದಾರರ ನೇಮಕಾತಿ ನಂತರ ಸದರಿ ರಸ್ತೆಯನ್ನು ತಮ್ಮ ಸುಪರ್ದಿಗೆ ಪಡೆಯುವುದಾಗಿ ಭಾರತೀಯ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರದವರು ವರದಿ ಮಾಡಿರುತ್ತಾರೆ. ಆದ್ದರಿಂದ ಸದರಿ ರಸ್ತೆಯನ್ನು ಇನ್ನು ಭಾರತೀಯ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರಕ್ಕೆ ಹಸ್ತಾಂತರಿಸಿರುವುದಿಲ್ಲ. ಆದರೆ ರಸ್ತೆಯನ್ನು ವಾಹನ ಸಂಚಾರಕ್ಕೆ ಯೋಗ್ಯವಾಗಿಡುವ ಸಲುವಾಗಿ ರಸ್ತೆಯ ಆಯ್ದ ಭಾಗಗಳಲ್ಲಿ ದುರಸ್ತಿಗಾಗಿ ಭಾರತೀಯ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರದವರು ರೂ.77.39 ಲಕ್ಷಗಳ ಅನುದಾನ ನೀಡಿದ್ದು, ಟೆಂಡರ್ ಪ್ರಕ್ರಿಯೆ ಪ್ರಗತಿಯಲ್ಲಿದೆ. ಶೀಘ್ರದಲ್ಲಿ ಕಾಮಗಾರಿಯನ್ನು ಕೈಗೊಳ್ಳಲಾಗುವುದು. |

| | | |
|---|---|---|
| ಆ) | ಕಳೆದ 2013 ರಿಂದ ಇಲ್ಲಿಯವರೆಗೆ ಔರಾದ್-ಬೀದರ್ ರಸ್ತೆಗಾಗಿ ಖರ್ಚು ಮಾಡಿದ ಅನುದಾನ ಎಷ್ಟು (ವಿವರ ನೀಡುವುದು) | ಸದರಿ ರಸ್ತೆ ದುರಸ್ತಿಗೆ 2013 ರಿಂದ ಇಲ್ಲಿಯವರೆಗೆ ಲೋಕೋಪಯೋಗಿ ಇಲಾಖೆಯಿಂದ ರೂ.2.330 ಕೋಟಿ ವೆಚ್ಚ ಮಾಡಲಾಗಿರುತ್ತದೆ.<br><br>ರಾಜ್ಯ ಹೆದ್ದಾರಿಯ ಅಭಿವೃದ್ಧಿ ಯೋಜನೆ ಅಡಿಯಲ್ಲಿ ಸದರಿ ರಸ್ತೆ ಅಭಿವೃದ್ಧಿಗಾಗಿ ಒಟ್ಟು ರೂ.28.10 ಕೋಟಿ ವೆಚ್ಚ ಮಾಡಲಾಗಿದೆ.<br><br>ರಾಷ್ಟ್ರೀಯ ಹೆದ್ದಾರಿಯ ವತಿಯಿಂದ 2019ನೇ ಸಾಲಿನಲ್ಲಿ ರೂ.1.23 ಕೋಟಿ ವೆಚ್ಚದಲ್ಲಿ ನಿರ್ವಹಣೆ ಮತ್ತು ದುರಸ್ತಿ ಕಾಮಗಾರಿಯನ್ನು ಕೈಗೊಳ್ಳಲಾಗಿದೆ. |
| ಇ) | ಔರಾದ್-ಬೀದರ್ ರಾಜ್ಯ ಹೆದ್ದಾರಿ ರಾಷ್ಟ್ರೀಯ ಹೆದ್ದಾರಿಯಾಗಿ ಮೇಲ್ದರ್ಜೆಗೇರಿದ್ದು, ರಸ್ತೆ ನಿರ್ಮಾಣವಾಗಲು ಇನ್ನೂ ಎಷ್ಟು ಕಾಲಾವಧಿ ಬೇಕಾಗುವುದು (ಮಾಹಿತಿ ನೀಡುವುದು) | ಈ ಹೆದ್ದಾರಿಯ ಕಿಮೀ.0.00 ರಿಂದ 9.30 ರವರೆಗಿನ ರಸ್ತೆಯು ರಾಷ್ಟ್ರೀಯ ಹೆದ್ದಾರಿ ವಶದಲ್ಲಿರುತ್ತದೆ. ಕಿಮೀ.9.30 ರಿಂದ 46.700 ರವರೆಗಿನ ಕಾಮಗಾರಿಗೆ ಟೆಂಡರ್ ಪ್ರಕ್ರಿಯೆ ಪ್ರಗತಿಯಲ್ಲಿದ್ದು, ಗುತ್ತಿಗೆದಾರರ ನೇಮಕಾತಿ ನಂತರ ಸದರಿ ರಸ್ತೆಯನ್ನು ತಮ್ಮ ಸುಪರ್ದಿಗೆ ಪಡೆಯುವುದಾಗಿ ಭಾರತೀಯ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರದವರು ವರದಿ ಮಾಡಿರುತ್ತಾರೆ. ಕಾಮಗಾರಿಯ ಕಾಲಾವಧಿ 24 ತಿಂಗಳುಗಳು ಇರುತ್ತದೆ. |
| ಈ) | ಅತಿವೃಷ್ಟಿಯಿಂದ ಹಾಳಾದ ಬ್ರಿಡ್ಜ್‌ಗಳ ದುರಸ್ತಿಗೆ ಖರ್ಚು ಮಾಡಿದ ಅನುದಾನವೆಷ್ಟು; ಕಾಮಗಾರಿಗಳು ಕಳಪೆ ಮಟ್ಟದಲ್ಲಿ ನಡೆದಿದೆ ಎಂಬ ದೂರುಗಳು ಬಂದಿವೆಯೇ; ಈ ಬಗ್ಗೆ ಯಾವ ಕ್ರಮ ಕೈಗೊಳ್ಳಲಾಗಿದೆ? | ಬೀದರ್‌ನ ಕೌಠಾ ಸೇತುವೆಯನ್ನು ಲೋಕೋಪಯೋಗಿ ಇಲಾಖೆ ವತಿಯಿಂದ ನಿರ್ಮಿಸಲಾಗಿದೆ. ರಸ್ತೆ ಸಾರಿಗೆ ಮತ್ತು ಹೆದ್ದಾರಿಗಳ ಮಂತ್ರಾಲಯವು ದಿನಾಂಕ:14.05.2020 ರಲ್ಲಿ Gazette of India ದಲ್ಲಿ ಸದರಿ ರಸ್ತೆಯನ್ನು ಭಾರತೀಯ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರಕ್ಕೆ ವಹಿಸಿದೆ. ಮೇಲೆ ತಿಳಿಸಿದಂತೆ ಸದರಿ ರಸ್ತೆಯನ್ನು ಇನ್ನು ಭಾರತೀಯ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರ ಹಸ್ತಾಂತರಿಸಿರುವುದಿಲ್ಲ.<br><br>ಸದರಿ ಸೇತುವೆಯ ಅಪ್ರೋಚ್ ರಸ್ತೆ ಕುಸಿದಿದ್ದು, ಅದರ ಪುನರ್ ನಿರ್ಮಾಣಕ್ಕಾಗಿ ಭಾರತೀಯ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರದವರು ರೂ.133.15 ಲಕ್ಷ ಬಿಡುಗಡೆ ಮಾಡಿದ್ದು, ಟೆಂಡರ್ ಪ್ರಕ್ರಿಯೆ ಪ್ರಗತಿಯಲ್ಲಿದೆ. |

ಕಡತ ಸಂಖ್ಯೆ: ಲೋಇ 179 ಸಿಐಎಸ್ 2020 (ಇ)

(ಗೋವಿಂದ.ಎಂ.ಕಾರಜೋಳ)
ಉಪಮುಖ್ಯಮಂತ್ರಿ
ಲೋಕೋಪಯೋಗಿ ಇಲಾಖೆ